ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಕುಡಿಯುವ ನೀರಿನಲ್ಲಿ ಯುರೇನಿಯಂ ಅಂಶ ಮಿತಿಮೀರಿದ ಪ್ರಮಾಣದಲ್ಲಿರುವ ಬಗ್ಗೆ

ಶ್ರೀ ಕೆ. ಗೋವಿಂದರಾಜ್ (ವಿಧಾನಸಭೆಯಿಂದ ಚುನಾಯಿತರಾದವರು) :-

488(382) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದ ಸರಿ ಸುಮಾರು 8 ಜಿಲ್ಲೆಗಳಾದ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಯಚೂರು, ಬಳ್ಳಾರಿ, ತುಮಕೂರು, ಮಂಡ್ಯ, ಕಲಬುರಗಿ ಮತ್ತು ಕೋಲಾರ ಜಿಲ್ಲೆಗಳ ಕೆಲವು ಗ್ರಾಮಗಳಲ್ಲಿ ಲಭ್ಯವಿರುವ ನೀರಿನಲ್ಲಿ ಯುರೇನಿಯಂ ಮಿತಿ ಮೀರಿದ ಪ್ರಮಾಣವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಕುಡಿಯುವ ನೀರಿನಲ್ಲಿ 30 ಮೈಕ್ರೋಗ್ರಾಂಗಿಂತ ಕಡಿಮೆ ಯುರೇನಿಯಂ ಅಂಶ ಇರಬೇಕೆಂದು ವಿಶ್ವಸಂಸ್ಥೆ ನಿಗದಿಪಡಿಸಿದ್ದು, ಈ ಜಿಲ್ಲೆಗಳ ಕೆಲವು ಗ್ರಾಮಗಳಲ್ಲಿ ನೀರಿನಲ್ಲಿ ಈ ಮಿತಿಗಿಂತ ಹೆಚ್ಚಾಗಿದ್ದು, ಇದು ಕುಡಿಯಲು ಯೋಗ್ಯವಲ್ಲದೇ ನೀರು ಸೇವಿಸುವವರಿಗೆ ಕಿಡ್ನಿ, ತೊಂದರೆ, ಕ್ಯಾನ್ಸರ್, ಮೂಳೆಗೆ ಸಂಬಂಧಿಸಿದ ಸಮಸ್ಯೆಗಳು ಮತ್ತು ಕರುಳಿನ ತೊಂದರೆಗಳು ಕಾಣಿಸಿಕೊಳ್ಳುವುದು ನಿಜವೇ ;

(ಇ) ಈ ಸಮಸ್ಯೆಗಳ ನಿವಾರಣೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರಗಳನ್ನು ಒದಗಿಸುವುದು)